॥ ಕೂಸಿನ ಕಂಡೀರಾ ॥

ಕೂಸಿನ ಕಂಡೀರಾ ।
ಗುರು ಮುಖ್ಯಪ್ರಾಣನ ಕಂಡೀರಾ ॥ ಪ ॥

ಬಾಲನ ಕಂಡೀರಾ ।
ಬಲವಂತನ ಕಂಡೀರಾ ॥ ಅ ಪ ॥

ಅಂಜನೆಯುದರದಿ ಪುಟ್ಟಿತು ಕೂಸು ।
ರಾಮ ಚರಣಕೆ ಎರಗಿತು ಕೂಸು ॥
ಸೀತೆ ಉಂಗುರ ಕೊಟ್ಟಿತು ಕೂಸು ।
ಲಂಕಾಪುರವನೆ ಸುಟ್ಟಿತು ಕೂಸು ॥ ೧ ॥

ಬಂಡಿ ಅನ್ನವನುಂಡಿತು ಕೂಸು ।
ಬಕನ ಪ್ರಾಣವ ತೆಗೆಯಿತು ಕೂಸು ॥
ವಿಷದ ಲಡ್ಡುಗೆ ಮೆದ್ದಿತು ಕೂಸು ।
ಮಡದಿಗೆ ಪುಷ್ಪವ ಕೊಟ್ಟಿತು ಕೂಸು ॥ ೨ ॥

ಮಾಯಾವಾದಿಗಳ ಗೆದ್ದಿತು ಕೂಸು ।
ದ್ವೈತ ಮತವನ್ನುದ್ಧರಿಸಿತು ಕೂಸು ॥
ಮಧ್ವರಾಯರೆಂಬ ಪೆಸರಿನ ಕೂಸು ।
ಪುರಂದರ ವಿಠಲನ ಪ್ರೇಮದ ಕೂಸು ॥ ೩ ॥